# ಓದೋಣ ಬಾಳಿಗೊಂದು
# ಕಾದೋಣ ಕಾನೂನು



ಮಹಿಳಾ ಸಮಖ್ಯ ಕರ್ನಾಟಕ

ಚೆನ್ನವ್ವ ಮನೆಯ ಕೆಲ್ಸಾ
ಮುಗಿಸಿ ದೀಪದ ಬೆಳಕಿನಲ್ಲಿ
ಬೀಸುವ ಕಲ್ಲಿನಮುಂದೆ
ಕುಳಿತುಕೊಳ್ಳುತ್ತಾಳೆ







ಚೆನ್ನವ್ವನ ಪಕ್ಕ ನಿಂತು
'ನಮ್ಮ ಮನಿ ಬೀಸಿ ಕಲ್ಲು ಆಡ್ತು ಅಂದ್ರ ಊರೆಲ್ಲ ಬೀಗರು' ಅನ್ನೋ ಹಂಗ ಯಾವ ಬೀಗರಿಗೆ ಹಂಗ ಬಿಟ್ಟು ಕಣ್ಣಾಗೇ ಕುಂತು ಜೋಳ ಬೀಸ್ತಾ ಇದೀ ? ಬೀಸು ಕಲ್ಲಿಗೂ ನಿಂಗೂ ಬಲೇ ನಂಟು ಬಿಡು.


ಬಾ ನಂಜವ್ವ, ಕಟ್ಟಿಗೊಂಡ ಗಂಡ ಕಂಡೋರ ಎಂಜಲಿಗೆ ಹೋದ ಅಂತ ಹೆತ್ತೋಳು ಕಳ್ಳಬಳ್ಳಿ ಬೀಸಾಡಿಕಾದದಾ.....? ಬೆಳಗ್ಗ ಹೈಕಳು ಸಾಲಿಗೆ ಹೋಕ್ತಾವಲ್ಲ. ದೂರ....... ಮಧ್ಯಾಹ್ನಕ್ಕೆ ನಾಕು ರೊಟ್ಟಿ ಬಡಿದುಕೊಡಾನಾ ಅಂತ.


ಈ ಕಲ್ಲ ಮುಂದ ಕೂತ್ಕೊಂಡ್ರ ನಿನ್ನ ಧ್ಯಾನ ಯಾವುದೋ ಲೋಕದಲ್ಲಿ ಇರುತ್ತೈತಿ ಬಿಡು ಚೆನ್ನವ್ವ


ಮೂವತ್ತು ವರ್ಷದ ನನ್ನ ಬದುಕನ್ನ ಈ ಕಲ್ಲು ಹಂಚಕೊಂಡೈತಿ. ಒಳ್ಳೆದನ್ನ ಗುಣಾಲಿಲ್ಲ ಬೆಳ್ಳಂದನ್ನ ಹೊದಿಲಿಲ್ಲ. ಈಟುದ್ದ ಇದ್ದಾಗ ನನ್ನ ಮದ್ವಿ ಆದಾಗ್ನಿಂದ ಇದು ನನ್ನ ಸಂಕಟ ಕೇಳ್ಕೈತಿ. ಕಟ್ಕೊಂಡ ಗಂಡ ಎರಡು ಮಕ್ಳ ಮಾಡಿ ತಾರಾಡ್ಕೊಂಡು ತೂರಾಡ್ಕೊಂಡು ಯಾವಳ ಹಿಂದೋ ಹೋದಾಗ ಈ ಕಲ್ಲು ನನ್ನ ಕಣ್ಣೀರ್ ಒರಸೈತಿ. ನಾನು ಮನುಷ್ಯರ ಜೋಡಿ ಮಾತಾಡಕಿಂತಾ, ಈ ಕಲ್ಲಿನ ಜೋಡಿ ಮಾತಾಡಿದ್ದೇ ಹೆಚ್ಚು ಅನಬರುದಕ್ಕ.


ಅಯ್ಯೋ ನನ್ನ ಗ್ಯಾನಾನೇ....
ಹುತಕಾ ನಂಜವ್ವ.......
ಹೆತ್ತೋನು.....


ಆ ಹುಡುಗರನ್ನ ಯಾಕೆ ಈಟೊಂದು ತ್ರಾಸ ತಗಂಡು ಸಾಲೀಗ್ ಕಳಸಬೇಕು ಅನ್ನೋದು ದೇವ್ರಿಗೇ ಗೊತ್ತು. ನಿನ್ನ ಮಗಳಿಗೆ ಏಳು ವರ್ಷ ತುಂಬ್ಲಿಲ್ಲ. ಮಗನಿಗೆ ಒಂಬತ್ತು ವರ್ಷ. ಇವತ್ತು ನಾಳೆ ಹೆಂಗಾದ್ರೂ ಅವಕ್ಕೆ ಮದುವೆ ಮಾಡ್ಬೇಕು. ಯಾಕೆ ಇಷ್ಟು ಕಷ್ಟ ಪಡ್ತೀಯೋ ಏನೋ?


ಇರಲಿ...... ನಂಜವ್ವ.... ನಾನು ಮುಂಜಾನೆಯಿಂದ ಕೇಳಬೇಕಂತ ನೋಡ್ದೆ. ಈ ಮನೀ ಕೆಲಸದಾಗ ಸೌದು ಸಿಗೋದಿಲ್ಲ. ಆ ರಾಮಕ್ಕನ ಮಗಳ್ನ ಮುಂಜಾನೆ ತಾಡಿ ಮ್ಯಾಲ ದವಾಖಾನೀಗೆ ಕರೆದುಕೊಂಡು ಹೋದ್ರಂತ. ಆ ಕೂಸು ಹಂಗೈತಿ ಅಂತ ನಿನಗೇನಾರ ತಿಳಿತೇನು?
"ಅಯ್ಯೋ ಬಸಿರಿ ಇದ್ದವಳು ಹಡೀತಾಳ, ಮೋಸಿರು ಇದ್ದವಳು ಸಡೀತಾಳ" ಬಿಡು, ನಮಗ್ಯಾಕ, ತುಸು ಎಲಿ, ಅಡಿಕೆ ಇದ್ರ ಕೊಡ್ತೀಯ?


ಚೆನ್ನವ್ವ ಸೊಂಟದ ಚಂಚಿಯಿಂದ ಎಲಿ ಅಡಿಕೆ ಕೊಡುತ್ತಾಳೆ


ಅದ್ಯಾಕೆ ಹಂಗ ಅಂತೀಯ? ಅದು ನಿನ್ನ ಮಗಳು, ಬಸ್ರಿ ಬೇರೆ. ಏನಾದ್ರು ಹೆಚ್ಚು ಕಡಿಮೆ ಆಗಿಬಿಟ್ಟಾತಂತ ಜೀವ ಬೆಳಗ್ಗಯಿಂದ ಕುದೀತ್ತೈತಿ. ಅವಳು ನಿನ್ನ ಸವತಿಯಾದ್ರೇನು? ಆದರೆ ಆ ಕೂಸು ನಿನ್ನದು. ಪಾಪ.




ನಿನಗೇನು ಗೊತ್ತಾಗತ್ತೆತಿ ಬಿಡು ಚೆನ್ನವ್ವ, ಬೆಳ್ಳಗಿರೋದೆಲ್ಲ ಹಾಲು ಅಂತ ನಂಬ್ತೀಯ. ಆ ರಾಮಕ್ಕ ನನ್ನ ಹೊಟ್ಟಿ ಉರಿಸ್ತಾಳೆ. ಆಕಿ ಅಣ್ಣನ ಮನೀಗೇ ಮಗಳ್ನ ಕೊಟ್ಲು....ಅವರ ಮನಿಯಿಂದ ಸೊಸೀನ ತಂದ್ಲು. ಒಂದೆ ಮದುವ್ಯಾಗ ಎರಡು ಮದ್ವಿ ಮಾಡಿ ಖರ್ಚು ಉಳಸಿದ್ಲು. ಆಕಿ ವಂಶಾನೂ ಚಿಗುರ್ತಾ ಐತಿ..... ಆದರೆ ನನ್ನ ಮಗಳ ಕಿತಿ ನೋಡು. ಮದುವೆ ಮಾಡಿ ಎರಡು ವರ್ಷ ಆದರೂ ಇನ್ನೂ ದೊಡ್ಡಾಕಿ ಆಗ್ಲಿಲ್ಲಾ. ನಂಗೆ ಅದೆ ಚಿಂತಿ ಹತ್ತೆತಿ.


ನಂಜಕ್ಕ, ನಿನ್ನ ಮಗಳು ದೊಡ್ಡೋಳು ಆಗಲದ ಇರಾಕ ರಾಮಕ್ಕನ ಮಗಳ್ನ ದವಾಖಾನೀಗೆ ಕರೆದು ಕೊಂಡು ಹೋಗಾಕ ಏನು ಸಂಬಂಧ ಹೇಳು ? ನೆರೆಮನೆಯವಳು ಎಳ್ಳು ಹುರಕೊಂಡು ತಿಂದ್ಲು ಅಂದ್ರ ನಿನಗ್ಯಾಕ ಹೊಟ್‌ಬ್ಯಾನಿ ?


ನಿನಗೇನು ನಿನ್ನ ಮಗಳ ಮದುವೆ ಚಿಂತಿ ಇಲ್ದೇ ಇರಬಹುದು. ಆದ್ರೆ ನನ್ನ ಮಗಳಿಗೆ ತೊಟ್ಟಿಲಲ್ಲೇ ನನ್ನ ತಮ್ಮನಿಗೆ ಕೊಡ್ತೀನಂತ ಹೆಸರ ಇಟ್ಟಿದ್ದೆ. ಹಂಗ ಬಾಸಿಂಗ ಕಟ್ಟಿದಿನಿ. ನನ್ನ ಮಗಳು ದೊಡ್ಡಾಕಿ ಆಗೂದನ್ನ ನೋಡಲಿಕ್ಕೆ ಹತ್ತ್ಯಾನ. ಸಂಬಂಧ ಬಿಟ್ಟು ಹೋಗಬಾರದಂತ ನಾನು.......


ನಂಜವ್ವ ಮಕ್ಕಳ ಮದ್ವೆ ಅಂದ್ರ ಗೊಂಬೆಯಾಟೇನು ?
ಶುರು ಮಾಡ್ದಾ, ಅಯ್ಯೋ ನಾನು ಬರ್ತೀನವ್ವ. ಮುಂಜಾನೆದ್ದು ನಾನು ಗೌಡ್ರ ಮನೀ ಹೊಲಕ್ಕೆ ಕಳೆ ತೆಗಿಯಾಕ ಹೋಗಬೇಕು.


ತೊಟ್ಟಿಲಿಗೆ ಬಾಸಿಂಗ ಕಟ್ಟಿ ಮದುವೆ..........
ಚೆನ್ನವ್ವ ತನ್ನಲ್ಲೇ ಗೊಣಗುಟ್ಟಿಕೊಂಡಳು


ಚೆನ್ನವ್ವ ಮಗಳ ಮುಖದ ಕಡೆಗೆ ನೋಡುತ್ತಾಳೆ. ತನ್ನದೇ ಒಂದು ಪ್ರತಿರೂಪ. ಹಾಲುಗಲ್ಲ.... ತಾನೂ ಸಹ ಎಳೆಯ ವಯಸ್ನಾಗೆ ಹಾಗೆ ಇದ್ದಿರಬಹುದೇನೋ.......







ತೊಟ್ಟಿಲಿಗೆ ಬಾಸಿಂಗ ಕಟ್ಟಿ ತನಗೆ ಮದುವೆ

ಅವ್ವಗೆ ತೊಟ್ಟಿಲಲ್ಲಿ ಮದುವೆ

ನನ್ನ ಅಜ್ಜಿಗೂ ತೊಟ್ಟಿಲಲ್ಲಿ ಮದುವೆ

ಹೊಟ್ಟ್ಯಾಗ ಇರು ಕೂಸು ಹೆಣ್ಣು ಅಂತ ಗೊತ್ತಾಗಿದ್ರ ಅದಕ್ಕೂ ಆವಾಗ್ಲೇ ಮದುವಿ ಮಾಡುತ್ತಿದ್ದರೇನೋ?



ಚೆನ್ನವ್ವನ ನೆನಪು ಮಸಕು ಮಸಕು. ಮನೆ
ಮುಂದೆ ಹಸಿರು ಚಪ್ಪರ..... ಹೊಸ ಸೀರೆ....
ತಲೆತುಂಬಾ ಹೂವು.... ಮೈಮೇಲ್ ಅಜ್ಜೀದು
ದುಡ್ಡಿನ ಸರ..... ಮನಿ ತುಂಬಾ ಬೀಗರು.....
ಪಕ್ಕದಲ್ಲೇ ಹುಡುಗ......



ಅದರ
ಶ್ರೀಮಂತಿಕೆ
ಒಂದೆರಡು
ದಿನದ್ದು

ನಾನು ದೊಡ್ಡವಳಾದೆ
ಅಂದ್ರು. ನನ್ನ ಮೈಯಾಗ
ಅದೇನೋ ಬದಲಾವಣೆ
ಆಯ್ತು... ನಾಚ್ಕಿ, ಭಯ,
ಏನೇನೋ ವಿಚಿತ್ರ ಸಂಕ್ಟ.



ನಾನು ದೊಡ್ಡೋಳಾದ ಮುದ್ದಿ
ಗಂಡನ ಮನೀಗೆ ಕಳಿಸಿದ್ರು.







ಗಂಡಿಂದು ತುಂಬಿದ ಸಂಸಾರ. ಗಂಡ, ಅತ್ತೆ,
ಮಾವ, ಮೈದುನ, ನಾದಿನ್ಯಾರು

ಚೆನ್ನವ್ವ ಗಂಡನ
ಮನೆಯ ಹೊಸಿಲು
ತುಳೀತಿದ್ದ ಹಾಗೆ
ಪುಟ್ಟ ಹೆಗಲಿಗೆ
ಸಂಸಾರದ ನೊಗ
ಜೋತು ಬಿತ್ತು.



ಹೊತ್ತು ಹೋತಂದ್ರು..
ಬಾಂಡಿ ತೊಳೀಬೇಕು
ಕಸ....ಅಡಿಗೆ ಬಟ್ಟೆ
ಒಗೀಬೇಕು... ಕಟಗಿ
ತರಾಕ... ಕೂಲಿ
ಕೆಲಸಕ್ಕೆ ಹೋಗಬೇಕು




ಗಂಡನ ಮನೀಗೆ ಬಂದ ಮೂರು ತಿಂಗಳಿಗೇ ಸೋನಿ ಇನ್ನೂ ಬಸಿರಾಗ್ಲಿಲ್ಲ ಅಂತ ಅತ್ತೆ. ಮಂದಿ ಮುಂದ ಹೇಳಾಕ ಶುರು ಮಾಡಿದ್ಲು.


ಸೋನಿ ಬಸಿರಿ ಅಂತ ತಿಳಿದ ಮ್ಯಾಗ ಅತ್ತೆ ಸರಿಯಾಗಿ ಉಂಡ್ಯಾ, ತಿಂದ್ಯಾ ಅಂತಿಂದ್ಲು
ನಿನ್ನ ಹೊಟ್ಟ್ಯಾಗ ನಮ್ಮ ವಂಶ ಬೆಳೀತಾ ಐತಿ ಅಂತಿದ್ಲು


ಗಂಡ ಅನ್ನೋನ ಜೊತಿಯಾಗ ಮಾತಿಲ್ಲ. ಕತಿಯಿಲ್ಲ.


ಬೆಳಗ್ಗೆ, ಸಂಜೀಕ ತಾಟ ಮುಂದ ಕುಂತಾಗ ಉಣ್ಣಾಕ ಹಾಕೋದು. ಎಲ್ಲರೂ ಉಂಡು ಮಲಗಿದ ಮ್ಯಾಲ ಅವ ಬರು ದಾರಿ ಕಾಯೋದು.


ಮನಿಯಾಗ ಅತ್ತಿ. ಮಾವ ಅವನಿಗೆ ಏನೂ ಕೇಳ್ತಿರಲಿಲ್ಲ. ಅತ್ತಿ ಮಾತ್ರ 'ಸಾಲಿ ಕಲಿಸುದ ಬ್ಯಾಡ ಅಂತ ಬಡಕೊಂಡೆ ಆ ಕಡೆ ಸಾಲೀನು ಕಲೀಲಿಲ್ಲ, ಈ ಕಡಿ ಮನೀ ಮ್ಯಾಲ ಕಾಳಜೀನೂ ಇಲ್ಲ' ಅಂತ ಗೊಣಗತಿದ್ಲು


ಚೆನ್ನವ್ವನಿಗೆ ಇದ್ಯಾವದೂ ತಿಳಿತಾ ಇರಲಿಲ್ಲ. ಅವಳಿಗೆ ಒಂಬತ್ತು ತಿಂಗಳು ತುಂಬಿದಾಗ, ತವರು ಮನೀಗ ಅತ್ತಿ, ಮಾವ, ನಗನಗತಾನೇ ಕಳಿಸಿದರು


ತವರು ಮನಿಯಾಗ ಚೆನ್ನವ್ವ ಮೂರು ದಿನ ಬ್ಯಾನೆ ತಿಂದೂ, ತಿಂದೂ ಕೊನೀಗೆ ಹಡದ್ಲು. ಆಕಿ ಎಕ್ಕದಾಗ ಕೂಸ್ನ ಬಟ್ಟ್ಯಾಗ ಸುತ್ತಿಟ್ಟಿದ್ದರು. ಆ ಕೂಸು ತನ್ನ ಹೊಟ್ಯಾಗಿತ್ತಂತ ಆಕಿಗೆ ಆಶ್ಚರ್ಯ ಆಗಿತ್ತು


ಹುಟ್ಟಿದ ಕೂಸು ಮೂರು ದಿನಾನೂ ಇರಲಿಲ್ಲ. ಕೂಸಿಗೆ ಮೈಯೆಲ್ಲಾ ಹಸುರಾಗಿತ್ತು
ಕೂಸು ಬೆಳದಿರಲಿಲ್ಲ ಅಂತ ನರಸಿಬಾಯಿ ಹೇಳಿದಳು


ಚೆನ್ನವ್ವ ಬಾಣಂತಿನ ಮುಗಿಸ್ಕೊಂಡು ಗಂಡನ ಮನೀಗ್ ಬಂದ್ಲು. ಬರೀ ಕೈಲಿ ಬಂದ್ಲು. ನಗ್ತಾ ಕಳಿಸಿದ ಅತ್ತಿ ಉರಿದು ಕೆಂಡವಾದ್ಲು.









ಅವಳ ಹೊಟ್ಯಾಗ ಮತ್ತೇ ಜೀವ ಬೆಳೀತು.







ಚೆನ್ನವ್ವ ಅಮ್ಮಾ ಅಂತ ಕೂಗಿಕೊಂಡು ಕೂದ್ಲ ಬಿಡಿಸಿಕೊಂಡ್ಲು. ಮೇಲೆ ಏಳಲಿಲ್ಲ

ರಾತ್ರಿ ಗಂಡ ಬಂದಾಗ್ಲೂ ಏಳಲಿಲ್ಲ.

ಏಳೇ.........
ಉಣ್ಣಾಕ್ಹಾಕು

ರಾತ್ರಿ ಇಷ್ಟೊತ್ತಾಗಿ
ಯಾಕೆ ಬರ್ತೀ..?



ಚೆನ್ನವ್ವ ಬರಬರುತ್ತಾ ಮೌನವಾಗ್ತಾ ಹೋದ್ಲು. ಬೆನ್ನ ಮುರಿಯುವಷ್ಟು ಮನೆಕೆಲ್ಸ. ರಾತ್ರಿ ಗಂಡ ಮನೀಗಿ ಬಂದಾಗ ಬೆನ್ನ ತಿರುಗಿಸಿ ಮಲಗತಿದ್ಲು.







ಚೆನ್ನವ್ವನ
ಆ ರಾತ್ರಿಗಳಿಗೆ
ಅವಳ ಮೌನ
ಬಿಕ್ಕಳಿಕೆಗಳು
ಜೊತೆಯಾದವು



ಗಂಡು ಮಗು ಹುಟ್ತು. ಗಂಡ, ಅತ್ತೆ ಮಾವರ ಜಗಳದಲ್ಲಿ ಮಗು ಹುಟ್ಟಿದ್ದು ಖುಷಿಗರ ಅನಿಸಲಿಲ್ಲ.

ಒಂದೆರಡು ದಿನ ನೋಡಿದ. ಸುಮ್ಮನಿದ್ದ. ಚೆನ್ನಾ, ಚೆನ್ನಾ ಅಂತ ಪ್ರೀತಿಮಾಡಿ ಕರೆದ. ಚೆನ್ನವ್ವ ಮಾತಾಡದೇ ಇದ್ದಾಗ 'ಎಷ್ಟೇ ನಿನ ಸೊಕ್ಕು ನಿನಗ ಇಷ್ಟು ಸೊಕ್ಕೈತಂತ ನನಗ ಗೊತ್ತಿರಲಿಲ್ಲ' ಅಂತ ಹೊಡಿಯಾಕೆ ಶುರು-ಮಾಡಿದ

ಹುಡುಗ ಹುಟ್ಟಿದ ವರ್ಷಕ್ಕೆ
ಹೆಣ್ಣು ಕೂಸು ಆತು.
ಚೆನ್ನವ್ವ ಬಾಣಂತನಕ್ಕೆ
ತಾಯಿ ಮನೀಗಿ
ಹೋಗಲಿಲ್ಲ




ಒಂದಿನ ಚೆನ್ನವ್ವ ಕೂಸ್ನ ಪಕ್ಕದಾಗ ಮಲಗಿಸಿಕೊಂಡು ನಿದ್ದೆ ಹತ್ತಿ ತಾಸಾಗಿತ್ತು. ಆಕಿನ್ನೂ ಹಸಿ ಬಾಣಂತಿ. ಗಂಡ ಕಂಠಪೂರ್ತಿ ಸೆರೆ ಕುಡಿದು ಮನೀಗ ಬಂದ.
ಚೆನ್ನಾ..... ಚೆನ್ನಾ..... ಅಂತ ಕರೆದ


ಚೆನ್ನವ್ವ ಮಾತಾಡಲಿಲ್ಲ. ಆಕಿನ ಮುಖ ತಿರುಗಿಸಿ ಎಬ್ಬಿಸಿದ


ಹಸಿ ಮೈ ಬಾಣಂತಿಗೆ ನಿದ್ದು ಎಲ್ಲಿ ಅಡಿಗಿತ್ತೋ ? ಹಿಂದಿನ ನೋವು ತಿಂದ ರಾತ್ರಿಗಳ ನೆನಪಾಗಿ ಗಂಡನ್ನ ನುಗಿಸಿದಳು. ಅದೇ ಅವಳ ಬದುಕಿಗೆ ಒಂದು ಕಪ್ಪು ಚುಕ್ಕೆಯಾಯ್ತು


ಆಮ್ಯಾಕೆ ಗಂಡ ಒಂದೊಂದು ದಿನ ಮನೀಗ ಬರದೇ ಇರೋನು, ಕೊನೀಗೆ ಒಂದು ವಾರವಾದ್ರೂ ಮನೀಗ ಬರ್ಲೇ ಇಲ್ಲ.


ಯಾವ ಘಳಿಗೀಲಿ ನೀನು ನಮ್ಮ ಮನೀಗ ಕಾಲಿಟ್ಯೋ ನನ್ನ ಮಗನ್ನೇ ದೂರ ಮಾಡಿದೆ ಅಂತ ಹಂಗಿಸಾಕ ಶುರು ಮಾಡಿದ್ಲು ಅತ್ತೆ.


ಚೆನ್ನವ್ವನಿಗೆ ಫಲ ಬಂತು. ಒಂದೆರಡು ದಿನ ತವರು ಮನಿಗೆ ಹೋಗ್ತೀನಿ ಅಂತ
ಮಕ್ಕಳನ್ನ ಕರಕೊಂಡು ಹೋದ್ಲು. ಗಂಡನ ಮನಿಯಾಗ ಕರಿಯಾಕ್ ಬರಲಿಲ್ಲ. ಅವಳೂ
ಗಂಡನ ಮನೀಗೆ ಹೋಗಲಿಲ್ಲ. ಅದರಂತೆ ತವರು ಮನಿ ಹಂಗ್ಯಾಕೆ ಅಂತ ಬೇರೇನೇ
ಒಂದು ಗುಡಿಸಲಾ ಹಾಕ್ಕೊಂಡು ಮಕ್ಕಳನ್ನ ಕಟಗೊಂಡು ಇರಾಕತ್ಲು


ಈ ಕಷ್ಟಗಳ ಅರಿವಿಲ್ಲದೇ ಮಲಗಿದ್ದ ಮುದ್ದು ಮಕ್ಕಳ ಕಡೆ ನೋಡಿದ ಚೆನ್ನವ್ವ ನಿಟ್ಟುಸಿರು ಬಿಡುತ್ತಾಳೆ


ಬೆಳಗ್ಗೆ ಚೆನ್ನವ್ವ ಎದ್ದಾಗ ತುಸು ಹೊತ್ತಾಗಿತ್ತು.
ಆಕೆಯ ಮಗಳು ಅಲ್ಲಿ ಇರಲಿಲ್ಲ


ಚೆನ್ನವ್ವ ಕಣ್ಣು ಉಜ್ಜುತ್ತಾ ಹೊರಗೆ ಬಂದಾಗ ಮಗಳು ನಿಂಜವ್ವನ ಮಗಳು ಲಕ್ಷ್ಮಿಯೊಂದಿಗೆ ಕುಂತಿದ್ಲು


ಬಾರೇ ಲಕ್ಷ್ಮೀ ಕುಂಟಾಬಿಲ್ಲ ಆಡೋನ
ಅವ್ವ ಕಂಡ್ರೆ ನನ್ನ ಸಿಗದಹಾಕತಾಳ
ನಾನು ಬರುದಿಲ್ಲವ್ವ


ಏ ಬಾರವ್ವ, ಸಾಲೀಲಾದ್ರೆ ಎಲ್ಲಾ
ಆಟಕ್ಕೆ ಬರ್ತಾರೆ. ನಮ್ಮ ಮನಿ
ಹತ್ರ ಯಾರೂ ಆಟಕ್ಕೆ ಬರುದಿಲ್ಲ.
ಯಾಕೆ ಬಾಳಾ ಜಲ್ದಿ ಎದ್ದುಬಿಟ್ಟಿದಿ.?
ಅವ್ವ ಜಲ್ದಿ ಎಬ್ಬಿಸಿದಳು. ಹೆಚ್ಚು
ಹೊತ್ತು ನಿದ್ದೆ ಮಾಡಿದ್ರ, ಏಳ್
ಮ್ಯಾಕೆ. ನಾಳೆ ನೀನು ಗಂಡನಮನೀಗೆ
ಹೋಗಾಕಿ.......... ಇಷ್ಟು ಹೊತ್ತು
ಮಲಗಿದ್ರ... ಅಂತಾಳೆ. ಎದ್ದೋಳೆ
ಕಸ ಗುಡ್ಸಿ ಬಾಗಿಲಿಗೆ ನೀರು ಹಾಕಿ ಬಂದೆ


ಏ ಬಾರೇ. ನಾನು
ಸಾಲೀಗೆ ಹೋಗುದ್ರಾಗ
ಆಡಿಕೊಂಡು ಹೋಗ್ತೀನಿ.
ಲಕ್ಷ್ಮೀ ಹಿಂದೆ ಮುಂದೆ
ನೋಡ್ತಾಳೆ. ಅವ್ವ
ಕಾಣಿಸದಿರುವದನ್ನು ನೋಡಿ
ಆಟವಾಡಲು ಶುರು
ಮಾಡ್ತಾಳೆ.


ಆವತ್ತು ಆ ಕಡಿ ಬೀದಿ
ಸರಸಿ, ಅವಳ ತಮ್ಮ ಬಂದ್ರು.
ಅವಳ ಜೋಡಿಗೆ ಆಡ್ತಾ
ಇದ್ವಿ. ಸರಸಿ ತಮ್ಮ ಬಿದ್ದ


ಲಕ್ಷ್ಮೀ ಕಿಸಕ್ಕಂತ ನಕ್ಲು


ಯಾಕೆ ಅಷ್ಟು ಜೋರಾಗಿ
ನಗ್ತಿ. ಮದುವ್ಯಾದ ಹುಡುಗಿ
ಅಷ್ಟು ಜೋರಾಗಿ ನಗಬಾರ್ದು.
ನೋಡಿದವರು ಏನಂದಾರು?


ಯಾವಾಗ್ಲಾ ನಿಮ್ಮವ್ವ ಗಂಡನ ಮನೀಗೆ ಕಳಸ್ತೀನಿ ಅಂತ ಹೆದರಿಸ್ತ್ರೆತಿಲ್ಲ ಯಾಕೆ? ಅಲ್ಲಿ ದೆವ್ವ ಐತೇನು?


ಲಕ್ಷ್ಮಿ, ನಂಜವ್ವ ಹೊರಗೆ ಬರುತ್ತಿರುವುದನ್ನು ನೋಡಿ ಆಟ ನಿಲ್ಲಿಸಿ ಅರ್ಧಕ್ಕೆ ಓಡಿ ಹೋಗುತ್ತಾಳೆ


ಹೊರಕ್ಕೆ ಬಂದ ನಂಜವ್ವನ ಗಮನ ಬರ್ತಾ ಇದ್ದ ಸಾವಿತ್ರಿ ಟೀಚರ್ ಕಡೀಗೆ ಬಿತ್ತು


ಚೆನ್ನವ್ವನ ಹತ್ತಿರ ಬಂದರು
ಸಾವಿತ್ರಿ ಟೀಚರ್ ಬನ್ರಿ


ಏನ್ರೀ ಯವ್ವಾ ನಮ್ಮ ಗೌರಿ ಹ್ಯಾಂಗ್ ಅನ್ಸತ್ರೆತಿ
ಮಕ್ಕಳು ಕಲಿಸಿದಂಗ ಕಲೀತಾವೆ. ಗೌರಿ ಶಾಣ್ಯಾ ಅದಾಳ

ನಂಜವ್ವನು ಸಾವಿತ್ರಿ ಟೀಚರ್ ಹತ್ತಿರ ಬಂದ್ಲು. ಮಗಳ ದೊಡ್ಡಾಕಿ ಆಗ್ದ ಇರಾಕ ಕಾರಣ ಕೇಳಿ ಏನಾದ್ರೂ ಮದ್ ಗಿದ್ ಮಾಡಿಸಿವರು ಗೊತ್ತೈತಿ ಅಂತ ಟೀಚರನ್ನ ಕೇಳಾಕ ಬಂದ್ಲು.









ನಿಮ್ಮಂತ ಹಿರೇರು ಮಕ್ಳು, ಮೊಮಕ್ಳು ಮದುವೀನ ಸಾಯುಮುಂದ ನೋಡಬೇಕಂತ ತೊಟ್ಟಿಲಲ್ಲಿ ಮದುವಿ ಮಾಡಿ ಬಿಡ್ತೀರಿ. ಸಂಬಂದ ಬಿಟ್ಟು ಹೋಗಬಾರದು ಅಂತ ಸ್ವಂತದಲ್ಲೇ ಮದುವಿ ಮಾಡಿಬಿಡ್ತೀರಿ. ಒಂದು ಖರ್ಚಿನಾಗ ಇನ್ನೊಂದು ಅಂತ ನಿಮ್ಮ ಲೆಕ್ಕ. ಆದ್ರೆ, ಹಾಲುಗಲ್ಲದ ಮಕ್ಕಳಿಗೆ ಏನು ಗೊತ್ತಾಗತ್ತೆತಿ. ಮದುವಿ ಅಂದ್ರ ಒಂದು ಆಟನಾ...?



ಹಂಗಲ್ರೀಯವ್ವ. ನಮ್ಮ ತಲೀ ಮ್ಯಾಲಿನ ಭಾರ ನಾವ ಇಳಸಿಕೋಬೇಕು. ಸಂಬಂಧ ಬಿಟ್ಟು ಹೋಗಬಾರದು ನೋಡ್ರವ್ವ. ನನ್ನ ತಮ್ಮ ಏನೂ ಖರ್ಚಿಲ್ಲದಂಗ ಈಸಿನ ಮದುವ್ಯಾಗ್ಯಾನ.

ಸಾವಿತ್ರಿ ಟೀಚರ್ ಅವರ ಜೊತೆ ತುಸು ಹೊತ್ತು ಮಾತಾಡ್ತಾನೆ ಇದ್ದರು



ಬರ್ತಿನವ್ವಾ
ನನಗೆ ಹೊತ್ತಾಗತ್ತೈತಿ
ಸಾವಿತ್ರಿ ಟೀಚರ್ ಹೊರಟಾಗ ನಂಜವ್ವ ದೊಡ್ಡ ನಿಟ್ಟುಸಿರು ಬಿಡುತ್ತಾಳೆ




ನಂಜವ್ವ ಗಾಬರಿಯಾಗಿ ಬಂದ್ಲು
ಚೆನ್ನವ್ವಾ...... ಚೆನ್ನವ್ವಾ........
ಕಸ ಗುಡಿಸುತ್ತಿದ್ದ ಚೆನ್ನವ್ವ ಹೊರಗೆ ಬಂದ್ಲು




ನನ್ನ ತಿಮ್ಮ ನಾನು ಕೆಲ್ಸಕ್ಕೆ ಹೋದಮ್ಯಾಲ ಮನೀಗೆ ಬಂದಿದ್ನಂತೆ. ನಾನು ಹೊಲದಿಂದ ಬರೂದ್ರಾಗ ಹೊರಟು ಹೋಗ್ಯಾನ
ಏನಾದ್ರೂ ಜರೂರೀ ಕೆಲ್ಸ ಇತ್ತೇನೋ ಅದಕ್ಕೆ ಹೋಗಿರಬಹುದು ಬಿಡು


ನನ್ನಮಗಳು ಮನಿ ಮೂಲ್ಯಾಗ ಮುದುಡಿಕೊಂಡು ಕುಂತಿದ್ದು ಎದ್ದೇ ಇಲ್ಲ. ಊಟಾನೂ ತಿಂದಿಲ್ಲ. ಒಂದು ಗುಟುಕು ನೀರೂ ಕುಡಿದಿಲ್ಲ. ಮಾತಾಡಿಸಿದರ ಒಂದು ಮಾತಿಲ್ಲ. ಒಂದೇ ಸಮನೆ ಕಣ್ಣಾಗ ನೀರು ಸುರಿಸ್ತೈತಿ. ನನಗೂ ಮಾತಾಡ್ಸಿ, ಮಾತಾಡ್ಸಿ ಎದಿ ನೋಯಾಕತ್ತೈತಿ
ಹೊಟ್ಯಾಗೇನಾದ್ರೂ ಬಾದೆ ಗಿದೆ ಐತೇನೋ, ನಡಿ ನಾನೂ ಬರ್ತೀನ......


ಯಾಕವ್ವ? ಏನಾತು? ಯಾಕ ಹಿಂಗ ಬೆಳಗ್ಗೆಯಿಂದ ಸಪ್ಪಗಿದ್ದೀ?
ಚೆನ್ನವ್ವ ಲಕ್ಷ್ಮೀ ಬಳಿ ಹೋಗಿ ತಲೆ ನೇವರಿಸುತ್ತಾಳೆ


ಲಕ್ಷ್ಮೀ ತಲೆ ಹುದುಗಿಸಿಕೊಂಡು ಮತ್ತೇ ಅಳಲು ಪ್ರಾರಂಭಿಸುತ್ತಾಳೆ

ಏಳವ್ವ. ಏನಾತು ನಿನಗ? ಯಾಕೆ ಹಿಂಗ
ಬೆಳಗ್ಗಯಿಂದ ಸಪ್ಪಗಾಗಿ ಕುಳತಿದ್ದಿ?
ಏನಂದ್ರೂ ಉಸಿರೇ ತೆಗಿ ಏಲ್ಲದು ನೋಡು. ಗಾಳಿ ಗೀಳಿ ಏನಾದ್ರೂ ಬಡ ಕೊಂಡೈತೋ ಏನೋ? ಚೆನ್ನವ್ವ ಒಂದ ಗಳಿಗೆ ಇಲ್ಲೇ ಇರು, ನಾನು ಬೂಬವ್ವನ ಮನೀಗೆ ಹೋಗಿ ಒಂದ ಮಂತ್ರ ಹಾಕ್ಸಿಕೊಂಡು ಬರ್ತೀನಿ
ಲಕ್ಷ್ಮೀ ಏಳವ್ವ.... ಏನಾಗೈತೆ ಅಂತನಾದ್ರೂ ಹೇಳವ್ವ.....
ಲಕ್ಷ್ಮೀ ಚೆನ್ನವ್ವನನ್ನು ತೆಕ್ಕೆಹಾಕಿ ಕೊಂಡು ಬಿಕ್ಕಿ ಬಿಕ್ಕಿ ಅಳುತ್ತಾಳೆ
ಬೆಳಗ್ಗೆ ಮಾವ ಬಂದಿದ್ರತ್ತೆ
ನಿನ್ನ ಗಂಡ ತಾನೆ ?
ಚೆನ್ನವ್ವ ಹೇಳುತ್ತಾಳೆ


ಮನೀಗ್ ಬಂದದ್ದೇ ಹಿತ್ತ್ಲಕಡಿ ಕದ, ಮುಚೀಕಡಿ ಕದ ಎಲ್ಲಾ ಹಾಕಿದ. ನಾನು ತಪ್ಪಿಸಿಕೊಂಡು ಹಿತ್ಲ ಕಡಿಗೆ ಹೋದೆ. ಅಲ್ಲಿಂದ ದರ ದರ ಎಳಕೊಂಡು ಬಂದ.
ಲಕ್ಷ್ಮೀ ಬಿಕ್ಕುತ್ತಲೇ ಇರುತ್ತಾಳೆ


ಲಕ್ಷ್ಮೀ ಜೋರಾಗಿ ಅಳುತ್ತಾಳೆ


ನಿನ್ನ ಗಂಡ ಇವತ್ತ ಹಿಂಗ ಮಾಡಿದ್ನ ಅಥವಾ.......
ಇಲ್ಲ ಚೆನ್ನವ್ವ, ಬಂದಾಗ್ಲೆಲ್ಲಾ ಹಿಂಗ ಮಾಡ್ತಾನ. ನನಗೆ ಅವನ್ನ ನೋಡಿದರ ಅಂಜಿಕೆ. ಕೈ ಕಾಲೆಲ್ಲ ಥರ ಥರ ನಡುಗ್ತಾವ. ಮತ್ ಹೋಗಬೇಕಾದರ ನಿನ್ನ ಎದುರಿಗೆ ಇನ್ನೊಂದು ಮದುವಿ ಮಾಡ್ಕೊಳ್ತೀನಿ ಅಂದ


ಮಾವ ಇನ್ನೊಂದು ಮದುವಿ ಮಾಡಿಕೊಂಡಿರೂ ಅಡ್ಡಿ ಇಲ್ಲ, ನನ್ನ ಮಾತ್ರ ಅಲ್ಲಿಗೆ ಕಳಿಸಬ್ಯಾಡ ಅಂತ ನಮ್ಮ ಅವ್ವಂಗೆ ಹೇಳು
ಹೋಗ್ಲಿ ಬಿಡು. ನಿಮ್ಮ ಅವ್ವಂಗೆ ನಾನು ಹೇಳ್ತೀನಿ. ನೀನು ಈಗ ಊಟ ಮಾಡ್ಬೇಳು







ಚೆನ್ನವ್ವ ಲಕ್ಷ್ಮಿಯನ್ನು ಮನೆಗೆ ಕರೆದುಕೊಂಡು
ಹೋಗಿ ಊಟಕ್ಕೆ ಕೊಡುತ್ತಾಳೆ


ನಂಜವ್ವ ಗಡಬಡಿಸಿ ಮನೀಗ ಬಂದ್ಲು.
ಮನೆಗೆ ಬೀಗ ಹಾಕಿತ್ತು.


ಚೆನ್ನವ್ವ...... ಚೆನ್ನವ್ವ.... ಆ ಬೂಬಮ್ಮ ಮಂತ್ರ ಹಾಕೊಟ್ಟದ್ದೇ ತಡ, ನೋಡಿದ್ಯಾ ನನ್ನ ಮಗಳಿಗೆ ಬಡಿದಿದ್ದ ಗಾಳಿ ಬಿಟ್ಟು ಹೊಂಟೋತು


ಬಾ ಇಲ್ಲಿ ಹೊರಗ. ನಿನಗೆ ವಯಸ್ಸಾಗಿದ್ದು ದಂಡಕ್ಕ ನೈ. ಗಾಳೀನೂ ಇಲ್ಲ; ಗೀಳೀನೂ ಇಲ್ಲ; ಹೊಸ ಗಂಡನ ಮನೀಗೆ ಹೋಗುದಿಲ್ಲಂತ ಹಟ ಹಿಡಿದೈತಿ.
ಅದ ಹ್ಯಾಂಗ ಆಕ್ಕೈತಿ ಚೆನ್ನವ್ವ, ಮಗಳು ದೊಡಾಕಿ ಆಗೂದನ್ನ ಕಾಯಾಕ ಹತ್ಯಾನ ನನ್ನ ತಮ್ಮ..... ನನಗೂ ಅದ ದೊಡ್ಡ ಚಿಂತಿ ಆಗೈತಿ..........
ನನ್ನ ತಮ್ಮ ಬ್ಯಾರೆ, ಅವ್ವವ್ರ ಹತ್ರ ಬ್ಯಾರೆ ಮದುವಿ ಆಗ್ತೀನಂತ ಹೇಳಾಕ ಹತ್ಯಾನ


ಬಿಡು ನಂಜವ್ವ. ಆಗೂ ಕಾಲಕ್ಕ ದೊಡ್ಡದಾಗತ್ತೈತಿ. ಮಕ್ಳು ಹಾಡಿಕೊಂಡು ಆಡಿಕೊಂಡು ಇರುದಬಿಟ್ಟು, ಸಣ್ಣ ವಯಸ್ನಾಗ ಮದುವಿ ಮಾಡಿ ಅವು ಬಸಿರಿ ಆಗಿ ಮಕ್ಳು ಹಡಿತಾವ. ಈ ಆಡೋ ಮಕ್ಳ ಕೈಯಾಗ ಕಾಡೋ ಕೂಸು ಕೊಡಾದೇ ನಮಗೆ ದೊಡ್ಡವರಿಗೆ ಚಿಂತಿ. ಗಂಡನ ಮನಿ ಸುಖಾ ನಾನೂ ನೀನು ಕಂಡಿದ್ದೇನು ?


ಚೆನ್ನವ್ವನ ಕೈ ಹಿಡಿದುಕೊಂಡು ಲಕ್ಷ್ಮಿ ಹೇಳುತ್ತಾಳೆ
ನಾನು ಮಾವನ ಜೋಡಿ ಮಾತ್ರ ಹೋಗುದಿಲ್ಲ. ಗೌರಿ ಜೋಡಿ ಸಾಲೀಗ್ ಹೋಗ್ತೀನಿ


ಮುಚ್ಚೇ ಬಾಯ್ನು. ಸಾವಿರಾರು ರೂಪಾಯಿ ಖರ್ಚ ಮಾಡಾಕತ್ತಿತ್ತೇನು ನಮ್ಮ ಕೈಯಾಗ ? ಏನೋ ತವರು ಮನಿ ಸಂಬಂಧ ಬಿಟ್ಟು ಹೋಗಬಾರದೆಂತ ನನ್ನ ತಮ್ಮ ಹೆಚ್ಚು ಖರ್ಚಿಲ್ಲದೆ ಕಟಗೊಂಡಾನ. ನೀ ಬಾಯಿ ಮುಚ್ಚಿಕೊಂಡಿರು. ನೀ ಹಿಂಗ ಆಡೂದಕ್ಕ ದೊಡ್ಡಾಕಿ ಆಗದ ಕುಂತಿ


ನೀನು ಮಾವನ ಜೋಡಿ ನನ ಕಳಿಸಿದಿ ಅಂದ್ರ ನಾನು ಗೌಡ್ರ ಬಾವ್ಯಾಗ ಬಿದ್ದ ಜೀವ ಬಿಡ್ತೀನಿ. ಅವರ ಮನೀಗ್ ಹೋಗುದಿಲ್ಲ
ನಂಜವ್ವನಿಗೆ ಮಗಳು ಇಷ್ಟು ಸಿಟ್ಟಿಗೇರಿ ಮಾತಾಡುದ ಕಂಡು ಗಾಬರಿಯಾಯಿತು




ಚೆನ್ನವ್ವ ಹೇಳಿದ್ದನ್ನು ಕೇಳಿ ನಂಜಕ್ಕ ತಲೆ ಮೇಲೆ ಕೈ ಹೊತ್ತಳು.




ನಂಜವ್ವ ಮನೀಗೆ ಹೋಗಿ ಒಲೆ ಹೊತ್ತಿಸುತ್ತಾಳೆ.



ಉರಿತಾ ಇರೋ ನಿಗೀ ನಿಗೀ ಕೆಂಡದಾಗ ಅವಳ ಬದುಕೆಲ್ಲಾ ಆಕಿ ಕಣ್ಣ ಮುಂದ ಬಂತು.

ಮಗಳ ವಯಸ್ನಾಗ ಮದುವೆಯಾಗಿ. ನಂಜಕ್ಕ ಗಂಡನ ಮನೀಗೆ ಹೋದ್ಲು.




ಆರು ತಿಂಗಳು ನೆಟ್ಟಗೆ
ಸಂಸಾರ ಮಾಡ್ಲಿಲ್ಲ.


ಹಾವು ಕಡಿದ ಗಂಡ
ಆರು ತಿಂಗಳಾಗೇ ಸತ್ತ.


ಹುಟ್ಟಿದ ಹುಡುಗಿ ಮಾರಿ
ನೋಡಲಿಲ್ಲ


ಇಪ್ಪತ್ತು ವರ್ಷ ಆಗೂ
ತನಕ ಮಗಳ ಜೊತೆಗೆ
ತವರು ಮನಿಯಾಗೆ
ಕಾಲಾ ಕಳದ್ಲು.


ಮದುವ್ಯಾಗಿ ಹೆಂಡ್ತಿನ
ಕಳಕಂಡ ಈರಣ್ಣ
ಈಕಿನ್ನ ಇಟ್ಕೊಂತೀನಿ
ಅಂದ. ಮನೆಯವರು
ಯಾರೂ ಒಪ್ಲಿಲ್ಲ.
ಕೊನಿಗೆ ಒಂದು ದಿನ
ಈರಣ್ಣ ನಂಜಪ್ಪನ್ನ
ಕರಕಂಡು ನಾಲ್ಕು
ಜನ ದೊಡ್ಡವರೊಂದಿಗೆ
ಒಡಿಕೆ ಮಾಡಿಕೊಂಡ.



ಉಡಿಕೆ ಮಾಡಿಕೊಂಡು ಚೆನ್ನಾಗಿರ್ತೀನಿ
ಅಂತ ನಂಜವ್ವ ಊರವರನ್ನೆಲ್ಲ ಕೇಳಕೊಂಡ್ಲು.
ಉಡಿಕೆ ಅಂತ ಈರಣ್ಣನಿಗೂ ಖದರ.



ಬೇಕಾದಾಗ ಮನೀಗೆ ಬರ್ತಾನೆ, ಇಲ್ಲಂದ್ರೆ
ಕುಡಿಕೊಂಡು ಎಲ್ಲೆಂದ್ರಲ್ಲೇ ಬಿದ್ಕೊಳ್ತಾನೆ. ಲಕ್ಷ್ಮೀ
ಅವನ ಮಗಳಲ್ಲಂತೆ ಅವಳ ಮ್ಯಾಲ ಮನಸ್ಸಿಲ್ಲ



ಈರಣ್ಣನಿಂದ ತಾನೇನಾದ್ರೂ
ಸುಖವಾಗಿದ್ದೀನಾ ಅಂತ ನಂಜವ್ವ
ತನಗೆ ತಾನೇ ಕೇಳಿಕೊಂಡ್ಲು.



ಈರಣ್ಣನಿಗೆ ನನ್ನ ದೇಹ ಬೇಕು
ಸಂಸಾರ ಮಾತ್ರ ಬೇಡ.


ನಂಜವ್ವನಿಗೆ ತಾನು ಅನುಭವಿಸಿದ
ನರಕಾನ ತನ್ನ ಮಗಳು
ಅನುಭವಿಸಬಾರ್ದು ಅಂತ
ಅನಿಸಿದಾಗ ಮಗಳ ಮೇಲಿನ
ಸಿಟ್ಟು ಸಾವಕಾಶ ಕರಗತೊಡಗಿತು


ನಂಜವ್ವ ಅಳಿಯನನ್ನು ಕರಿಯಾಕಂತ
ಅವನ ಮನೀಗೆ ಹೋದ್ಲು.


ಅಳಿಯ ಬರ್ಲಿಲ್ಲ.
ನಂಜವ್ವ ಬಣ
ಮಾರಿ ಮಾಡಿಕೊಂಡು
ಮನೀಗೆ ಬಂದ್ಲು


ತವರು ಮನಿ ಸಂಬಂಧ ಬಿಡಬಾರದು.
ಖರ್ಚು ಕಡಿಮೆಯಾಗಿತ್ತು. ತೊಟ್ಟಿಲಲ್ಲಿ
ಮದುವಿ ಮಾಡಿದ್ದು ಯಾವ ಭಾಗ್ಯಕ್ಕೆ ಅಂತ
ಕಣ್ಣಲ್ಲಿ ನೀರು ಸುರಿಸಿಕೊಂಡು ಬಂದ್ಲು.


ಮನೀಗೆ ಬಂದ ನಂಜವ್ವ
ಕಂಬಳಿ ಮ್ಯಾಲ ಅಡ್ಡಾದ್ಲು


ಚೆನ್ನವ್ವ, ನಂಜವ್ವ ಬಂದ ಸುದ್ದಿ
ತಿಳಿದು ಹುಡುಕಿಕೊಂಡು ಬಂದ್ಲು


ನನ್ನ ತಿಮ್ಮ ನನಗೆ ಮಾಡಿದ
ಮೋಸ ಕಂಡೇನವ್ವ....?
ಕಣ್ಣಾಗ ನೀರ ಹಾಕಿಕೊಂಡು ಕೈ
ಬಿಡಬೇಡ ಅಂತ ಕೈಕಾಲ
ಹಿಡಿಕೊಂಡ್ರೂ ಅವ ಮನಸ್ಸು
ಬದಲಾಯಿಸಲಿಲ್ಲವ್ವ. ಬ್ಯಾರೆ
ಮದುವಿ ಮಾತುಕತೆ ನಡಸ್ಯಾನ


ಹಿಂಗ ಮಲಗಿ ಯಾಕ ದುಃಖಮಾಡ್ತಿಯವ್ವ.
ಏಳು. ಹೋಗಿ ರಾಮಕ್ಕನ ಮಗಳ್ನಾರ ನೋಡಿ
ಬರೂನ. ಪಾಪ ದವಾಖಾನಿಗೆ ಸೇರಿಸಿ ನಾಲ್ಕು
ದಿನ ಆಗ್ತೆತಿ. ಎಷ್ಟು ಹೆರಿಗೆ ನೋವು
ತಿಂತ್ರತೋ ಕೂಸು


ಮೊದಲಾಗಿದ್ದರೆ ನಂಜವ್ವನ ಅಹಂ ಅಡ್ಡಿ ಬರುತಿತ್ತೇನೋ. ಮಗಳ ಮದುವೆ ಮುರುದು ಬಿತ್ತು ಅನಿಸಿದಾಗ ಆಕಿ ಮನಸಿನಾಗೆ ಮೊದಲಿನ ಸಿಟ್ಟು ಉಳಿದಿರಲಿಲ್ಲ. ಹೆರಿಗೆ ನೋವು ತಿಂತಾ ಮಲಗಿರೊ ಕೂಸಿನ ನೋಡಿದ್ಣಾಂತ ಆಕಿಗೂ ಅನಿಸ್ತು.
ನಂಜಕ್ಕ ಎದ್ದು ತಲೆ ಬಾಚಿಕೊಂಡ್ಲು


'ನೀನೂ ಬಾ' ಅಂತ ಮುದ್ದೆಯಾಗಿ ಕುಂತಿದ್ದ ಲಕ್ಷ್ಮೀಯನ್ನೂ ಕರೆದ್ಲು
ಲಕ್ಷ್ಮೀನೂ ತಲೆ ಬಾಚಿಕೊಂಡು ಹೊರಟ್ಲು


ಲಕ್ಷ್ಮೀ, ಚೆನ್ನವ್ವ, ನಂಜವ್ವ, ಅರ್ಧ ದಾರಿ ಹೋಗಿದ್ದರಷ್ಟೇ. ಹೆಣ್ಣಾಕ್ಕಳ ಗುಂಪೊಂದು ಇವರೆದುರಿಗೆ ಬಂತು.


ರಾಮಕ್ಕನ ಮಗಳು ಸತ್ತು ಹೋದ್ಲಂತೆ.
ಗುಂಪಿನಲ್ಲಿದ್ದ ಹೆಂಗಸೊಬ್ಬಳು ಲಕ್ಷ್ಮೀ, ಚೆನ್ನವ್ವ, ನಂಜವ್ವನನ್ನು ಉದ್ದೇಶಿಸಿ ಹೇಳಿದ್ಲು



ಮೂವರು ಅವಾಕ್ಕಾಗಿ ಹಾಗೇ ನಿಂತ್ರು




ಅದಕ್ಕೆವ್ವ, ಅವತ್ತು ಮಾಹಿತಿ ಮೇಳದಾಗ ಹೇಳಾಕ ಹತ್ತಿದ್ರು, ಚಿಕ್ಕ ವಯಸಿನ್ಯಾಗ ಮದುವಿ ಮಾಡಬಾರದಂತ

ರಾಮಕ್ಕನ ಮಗಳ ಸಾವಿನ ಸುದ್ದಿ ಮಾತಾಡುತಾ ಆ ಹೆಂಗಸ್ರು ಅಲ್ಲೇ ಮರದ ಕೆಳಗೆ ಕುಂತ್ರು

ಚೆನ್ನವ್ವ, ನಂಜವ್ವ, ಲಕ್ಷ್ಮೀನೂ ಅಲ್ಲೇ ಕುಂತ್ರು

ಎಳೇ ವಯಸ್ನಾಗೆ ಮದುವಿ ಮಾಡಿದ್ರೆ ದೇಹ ಇನ್ನೂ ಸರಿಯಾಗಿ ಬೆಳೆದಿರಲ್ಲ. ಹುಟ್ಟು ಕೂಸು ಸಾಯಬಹುದು. ರಾಮಕ್ಕನ ಮಗಳು ಸತ್ತಂಗೆ ಬಾಣಂತಿನೂ ಸಾಯಬಹುದು.



ಚೆನ್ನವ್ವನಿಗೆ ತಾನು ತವರು
ಮನೆಯಲ್ಲಿ ಮಣ್ಣು ಮಾಡಿಬಂದ
ಸಣ್ಣ ಕೂಸಿನ ನೆನಪಾಯ್ತು.









ನಂಜಕ್ಕ ಕಣ್ಣಲ್ಲಿ
ಬಂದ ನೀರನ್ನು
ಮೆಲ್ಲಗೆ
ಒರೆಸಿಕೊಳ್ಳುತ್ತಾಳೆ




ರಾಮಕ್ಕನ ಮಗಳ ಸಾವಿನ
ಹಿಂದಿನಿಂದ ಪ್ರಾರಂಭವಾದ
ಈ ಸುದ್ದಿಗಳಿಂದ ನಂಜಕ್ಕನ
ಮನಸ್ಸು ಶಾಂತವಾಗಿದ್ದು
ಕಿಂದು ಚೆನ್ನವ್ವನಿಗೂ
ಸಂತೋಷವಾಯ್ತು. ಆದ್ರೂ
ರಾಮಕ್ಕನ ಮಗಳ ಸಾವಿಗೆ
ಮನಸ್ಸು ಭಾರವಾಗಿತ್ತು.



ಚೆನ್ನವ್ವ,
ನಂಜವ್ವ, ಲಕ್ಷ್ಮೀ
ಮುಸ್ಸಂಜಿ
ಮಬ್ಬುಗತ್ತಲನ್ಯಾಗ
ಮನಿ ದಾರಿ
ಹಿಡಿದರು.

ಚೆನ್ನವ್ವ, ಲಕ್ಷ್ಮೀ, ನಂಜವ್ವ
ಮನೆಗೆ ಬರುತ್ತಾರೆ. ನಂಜವ್ವ
ದೀಪ ಹಚ್ಚಲು ಬರುತ್ತಾಳೆ






# ಬಾಲ್ಯ ವಿವಾಹ ಪ್ರತಿಬಂಧಕ ಕಾಯಿದೆ 1929

- ವಿವಾಹವಾಗುವ ಗಂಡಿಗೆ 21 ವರ್ಷಗಳು ಮತ್ತು ಹೆಣ್ಣಿಗೆ 18 ವರ್ಷಗಳು ತುಂಬಿಲ್ಲದೆ ಹೋದರೆ ಅದು ಬಾಲ್ಯ ವಿವಾಹವಾಗುತ್ತದೆ.
- ಹದಿನೆಂಟು ವರ್ಷದ ಮೇಲೆ ಮತ್ತು ಇಪ್ಪತ್ತೊಂದು ವರ್ಷದ ಒಳಗೆ ಇರುವ ಪುರುಷನು ಹದಿನೆಂಟು ವರ್ಷಕ್ಕಿಂತ ಸಣ್ಣ ವಯಸ್ಸಿನ ಹುಡುಗಿಯನ್ನು ಮದುವೆಯಾಗುವುದೂ ಶಿಕ್ಷಾರ್ಹವಾಗುತ್ತದೆ. ಹದಿನೈದು ದಿನಗಳ ಸರಳ ಶಿಕ್ಷೆ ಇಲ್ಲವೇ ಸಾವಿರ ರೂಪಾಯಿಗಳ ದಂಡ ಅಥವಾ ಎರಡೂ. ಇಪ್ಪತ್ತೊಂದು ವರ್ಷ ಮೇಲ್ಪಟ್ಟ ಗಂಡಸಿಗೆ ಮೂರು ತಿಂಗಳ ಶಿಕ್ಷೆ ಮತ್ತು ದಂಡ.
- ಬಾಲ್ಯ ವಿವಾಹವನ್ನು ನಡೆಸುವಂತಹವರು, ಉತ್ತೇಜಿಸುವವರು ಕೂಡ ಶಿಕ್ಷೆಗೆ ಗುರಿಯಾಗುತ್ತಾರೆ. ಮೂರು ತಿಂಗಳವರೆಗೂ ಶಿಕ್ಷೆ ಮತ್ತು ದಂಡ.
- ಬಾಲ್ಯ ವಿವಾಹವನ್ನು ಉತ್ತೇಜಿಸುವ, ಇಲ್ಲವೇ ನಡೆಯಲು ಅವಕಾಶ ಕೊಡುವ ಇಲ್ಲವೇ ತಡೆಯಬಹುದಾಗಿದ್ದರೂ ತಡೆಯದೆ ಹೋಗುವ ತಂದೆತಾಯಿಗಳು, ಪೋಷಕರು ಇಲ್ಲವೇ ಬೇರೆ ಯಾವದೇ ಜವಾಬ್ದಾರಿಯುತ ವ್ಯಕ್ತಿಗಳು ಶಿಕ್ಷಾರ್ಹರು. ಮೂರು ತಿಂಗಳವರೆಗೂ ಶಿಕ್ಷೆ ಮತ್ತು ದಂಡ.
- ಮಹಿಳೆಯರನ್ನು ಬಂಧಿಸಿ ಶಿಕ್ಷೆಗೊಳಪಡಿಸುವಂತಿಲ್ಲ.
- ತಂದೆ-ತಾಯಿಗಳು ಇಲ್ಲವೇ ಪೋಷಕರ ವಿಚಾರದಲ್ಲಿ, ಕೋರ್ಟು ಅವರನ್ನು ಸಾಧ್ಯವಿದ್ದೂ ತಡೆಯದೆ ಹೋದವರೆಂದೇ ಪರಿಗಣಿಸುತ್ತದೆ, ಅವರು ಸಾಕ್ಷ್ಯಾಧಾರಗಳನ್ನು ಒದಗಿಸದೇ ಹೋದರೆ.

ಬಾಲ್ಯ ವಿವಾಹ ಈ ಪ್ರಸ್ತುತದ ಜ್ವಲಂತ ಸಾಮಾಜಿಕ ಸಮಸ್ಯೆ, ಅದೂ ವಿಶೇಷವಾಗಿ ಮಹಿಳೆಯರ ಸಂದರ್ಭಕ್ಕೆ. ಸಾಕಷ್ಟು ಸದೃಢ ಹಿನ್ನೆಲೆಯನ್ನು ಸೃಷ್ಟಿಸಿಕೊಂಡಿರುವ ಈ ಪದ್ಧತಿ ಜಾತಿ-ವರ್ಗಗಳ ತಾರತಮ್ಯವನ್ನು ಮೀರಿ ನಿಲ್ಲುವಂತದ್ದು. ಬದಲಾಗುತ್ತಿರುವ ಸಮಾಜ ತನ್ನ ಪ್ರಕ್ರಿಯೆಯಲ್ಲಿ ಬಾಲ್ಯವಿವಾಹದಂತಹ ಪದ್ಧತಿಗಳನ್ನು ಒಂದು ಕಡೆಯಿಂದ ಅಳಿಸುತ್ತಾ (ಔಪಚಾರಿಕ ನೆಲೆಗಳಲ್ಲಿ) ಮತ್ತೊಂದು ಕಡೆಯಿಂದ ಬಲಗೊಳಿಸುತ್ತಾ ಹೋಗುತ್ತಿರುವುದು ಸಂಗತಿ.

ಅದೇನೇಯಾದರೂ ಹೆಣ್ಣಿನ 'ಖಾಸಗಿ ಬದುಕಿನ' ಕ್ರೂರತೆಗಳ ಮುಂದುವರೆದ ರೀತಿಯೇ ಇದಾಗುತ್ತದೆ. ಒಂದು ಖರ್ಚಿನಲ್ಲಿ ಎರಡು, ರಕ್ತ ಸಂಬಂಧಗಳನ್ನು ಕಾಪಾಡುವುದು ಏನೇ ಕಾರಣಗಳಾಗಿ ನಿಂತರೂ, ಹೆಣ್ಣಿನ ಸಂದರ್ಭಕ್ಕಂತೂ "ಅವಳನ್ನು ಅವಳ ಜಾಗದಲ್ಲಿ ಇಡಲು" ಬಳಸುವ ಅಸ್ತ್ರವೇ ಆಗುತ್ತದೆ ಇದು. ಒಂದು ಸಮಸ್ಯೆಯಾಗಿ ಬಾಲ್ಯವಿವಾಹ ಮಹಿಳೆಯ ವಿರೋಧವಾದದ್ದೇ ಆಗುತ್ತದೆ.

ಇಂತಹ ಒಂದು ಮಹಿಳೆಯರ ಸಮಸ್ಯೆಯನ್ನು "ಆಡೋಬಾಲೆಗೊಂದು ಕಾಡೋಕೂಸು" ಎತ್ತಿಕೊಂಡಿದೆ. ಸಮಸ್ಯೆಯ ಮುಖಗಳನ್ನು ಸೂಕ್ಷ್ಮವಾಗಿ ಬಿಡಿಸುತ್ತಾ ತನ್ಮೂಲಕ ಹೊಸ ಬಾಳಿಗಾಗಿ ಆಶಿಸುತ್ತದೆ. ಈ ಹೊಸಬಾಳಿನ ಸ್ವರೂಪವನ್ನು ಕಟ್ಟಿಕೊಡುವುದು ಕ್ಲೀಷೆಯಾಗುತ್ತದೆಂಬ ಸರಿಯಾದ ಗ್ರಹಿಕೆಯೇ ಇಲ್ಲಿದೆ. ಆದರೆ ಸಾವಿರಾರು ವರ್ಷಗಳ ಏಕಮುಖ ಗ್ರಹಿಕೆಯನ್ನು ಮುರಿಯುವ ಪ್ರಯತ್ನ ಆಗಬೇಕೆಂಬುದೇ ಇಲ್ಲಿನ ಆಶಯ.

**Rs. 12/-**